**ಉ ಗಾ ಭೋ ಗ : ರಾ ಗ – ಬೇ ಹಾ ಗ್**

ಅನ್ನದಾಸೆಗೆ ಪರರ ಮನೆಯ ಬಾಗಿಲಕಾಯ್ದು
ಅನೇಕ ಬಗೆಯಿಂದ ನೊಂದೆನೊ ಹರಿಯೆ
ಅನ್ಯತ್ರಪೊರಮಟ್ಟು ಪೋಗಲೀಸರು ಅವರು
ಮನ್ನಿಸಿ ಕೃಪೆಯಿಂದ ಕೂಡಿಕೊಂಡಿಹರೊ
ಅನಾಥಬಂಧು ಶ್ರೀಹಯವದನ ನಿನ್ನ
ಮನೆಯ ಕುನ್ನಿಗೆಂಜಲನಿಟ್ಟಂತೆ ಎನ್ನ ರಕ್ಷಿಸೊ

ಉ ಗಾ ಭೋ ಗ : ರಾ ಗ – ಷ ಣ್ಮು ಖ ಪ್ರಿ ಯ

ಒಂದು ಕಾಲದಲ್ಲಿ ಆನೆ ಕುದುರೆ ಮೇಲ್ಮೆರೆಸುವೆ
ಒಂದು ಕಾಲದಲ್ಲಿ ಬರಿಗಾಲಲ್ಲಿ ನಡೆಸುವೆ
ಒಂದು ಕಾಲದಲ್ಲಿ ಮೃಷ್ಟಾನ್ನವುಣಿಸುವೆ
ಒಂದು ಕಾಲದಲ್ಲಿ ಉಪವಾಸವಿರಿಸುವೆ
ನಿನ್ನ ಮಹಿಮೆಯ ನೀನೆ ಬಲ್ಲೆಯೊ ದೇವ
ಪನ್ನಗಶಯನ ಶ್ರೀಪುರಂದರವಿಟ್ಠಲ

**ಉ ಗಾ ಭೋ ಗ : ರಾ ಗ – ಸಿ ಂ ಹೇ ಂ ದ್ರ ಮ ಧ್ಯ ಮ**

**ಆವ ಜನುಮದ ತಾಯಿ ಆವ ಜನುಮದ ತಂದೆ**
**ಆವ ಜನುಮದ ಸತಿ ಆವ ಜನುಮದ ಸುತರು**
**ಆವ ಜನುಮದ ಬಂಧು ಆವ ಜನುಮದ ಬಳಗ**
**ಆವ ಜನುಮದ ಪಿಂಡ ಆವಂಗೆ ಜನಿಸುವೆವೊ**
**ನೀ ಒಲಿದು ಪಾಲಿಸಯ್ಯ ಸಿರಿಕೃಷ್ಣರಾಯ**

**ಆ ಪ ತ್ತು ಪ ರಿ ಹಾ ರ ಉ ಗಾ ಭೋ ಗ : ರಾ ಗ – ರ ಂ ಜ ನಿ**

ಆರಿಗಾರಾಗುವರೊ ಆಪತ್ತು ಕಾಲಕ್ಕೆ ಆರಿಗಾರಾಗುವರೊ ಸಂಪತ್ತು ಕಾಲಕ್ಕೆ
ಆರಿಂದ ಬಪ್ಪುವುದು ಆರಿಂದ ತಪ್ಪುವುದು ಆರಿಸಿನೋಡುವುದು ಇದರ ಕಾರಣವ
ಇದಕಾರು ವಾರಣದಲಿ ನೋಡಿ ಆರೋಪಿಸಲು ಎಲ್ಲ ಭಾರ ಅವಗೆ

ಕಾರುಣ್ಯಮೂರ್ತಿ ಗೋಪಾಲವಿಟ್ಠಲ ಈ ರೀತಿ ಅಂದವಗೆ ಇಲ್ಲೆ ಪೊರೆವ

**ಉ ಗಾ ಭೋ ಗ : ರಾ ಗ – ಆ ರ ಭಿ**

ನಿನ್ನನೇ ನಂಬಿದೆ ಕೃಷ್ಣ ಅನ್ಯರೊಬ್ಬರ ಕಾಣೆ
ಪನ್ನಂಗಶಯನ ಶ್ರೀವಕ್ಷ ಬಾರೊ
ಇರಳು ಹಗಲು ನಿನ್ನ ಚರಣಕ್ಕೆ ಮೊರೆಹೊಕ್ಕೆ
ಸರಿಯಾರು ಈರೇಳು ಭುವನದೊಳು ಹಯವದನ

**ಉ ಗಾ ಭೋ ಗ : ರಾ ಗ – ಭೈ ರ ವಿ**

ಬೊಮ್ಮನೆ ಎನ್ನಯ ದುಮ್ಮನ ಬಿಡಿಸಿ ಸುಮ್ಮನ ನೀಡು ಇಮ್ಮನ ಮಾಡದೆ ।
ಒಮ್ಮನವಿತ್ತು ಘಮ್ಮನೆ ಬಾ ರುಜೋ ತ್ರಮ್ಮನೆ ಎನ್ನಯ ಹಮ್ಮನು ಕಳಿ ನ ।
ಮ್ಮಮ್ಮನದುರದಿ ಮತ್ತೊಮ್ಮೆ ಜನಿಸದಂತೆರಮ್ಯನ ಮಾಳ್ಪದಧಮ್ಮನು ನಾನೋ ।
ಶಮ್ಮದಮ್ಮಗುಣ ಇಮ್ಮಡಿ ಮಾಡ್ಯನುಪಮ್ಮಚರಿತ ಪರಬೊಮ್ಮನ ತೋರಿಸು ।
ನಿಮ್ಮವನಲ್ಲವೆ ಸುಮ್ಮನಸರೊಡೆಯ ಗುರು ಜಗನ್ನಾಥವಿಟ್ಠಲ ಸಮ್ಮೊಗನಾಗಿರುವಂತೆ ಮಾಡೊ ।

**ಉ ಗಾ ಭೋ ಗ : ರಾ ಗ – ತೋ ಡಿ**

ಮನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ
ಧನದಿಂದ ಸಂತೋಷ ಕೆಲವರಿಗೆ ಲೋಕದಲ್ಲಿ
ವನಿತೆಯಿಂ ಸಂತೋಷ ಕೆಲವರಿಗೆ ಲೋಕದಲ್ಲಿ
ತನಯರಿಂ ಸಂತೋಷ ಕೆಲವರಿಗೆ ಲೋಕದಲ್ಲಿ
ಇನಿತು ಸಂತೋಷ ಅವರವರಿಗಾಗಲಿ ನಿನ್ನ ನೆನೆವೋ ಸಂತೋಷ ಎನಗಾಗಲಿ ನಮ್ಮ ರಂಗವಿಟ್ಠಲ

**ಉ ಗಾ ಭೋ ಗ : ರಾ ಗ – ಕಾ ನ ಡ**

ನಿನ್ನ ಧ್ಯಾನದ ಶಕ್ತಿಯ ಕೊಡೊ
ಅನ್ಯರಲಿ ವಿರಕ್ತಿಯ ಕೊಡೊ
ನಿನ್ನ ನೋಡುವ ಯುಕ್ತಿಯ ಕೊಡೊ

ನಿನ್ನ ಪಾಡುವ ಭಕ್ತಿಯ ಕೊಡೊ
ನಿನ್ನತ್ತೆ ಬರುವ ಸಂಪತ್ತಿಯ ಕೊಡೊ
ಚಿತ್ತದಿ ತತ್ವದ ಕೃತ್ಯವ ತೋರೊ
ಮತ್ತೆ ತುದಿಯಲಿ ಎನಗೆ ಮುಕ್ತಿಯ ಕೊಡೊ
ಅತ್ತತ್ತ ಮಾಡೊ ಭವಕತ್ತಲೆಯೆನಗೆ ಮುತ್ತಿದೆ ಹಯವದನ

**ಉ ಗಾ ಭೋ ಗ : ರಾ ಗ – ಕ ಲ್ಯಾ ಣಿ**

ಧ್ಯಾನವು ಕೃತಯುಗದಿ । ಯಜನ ಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ಗಾನದಿ ಕೇಶವಯೆನಲು ಕೈಗೊಡುವನು ರಂಗವಿಟ್ಠಲ

**ಉ ಗಾ ಭೋ ಗ : ರಾ ಗ – ಕಾಂಬೋದಿ**

ಬಲಿಯ ಮನೆಗೆ ವಾಮನ ಬಂದಂತೆ ಭಗೀರಥಗೆ ಶ್ರೀಗಂಗೆ ಬಂದಂತೆ
ಮುಚಕುಂದಗೆ ಶ್ರೀಮುಕುಂದ ಬಂದಂತೆ ಗೋಪಿಯರಿಗೆ ಗೋವಿಂದ ಬಂದಂತೆ
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ
ನಿನ್ನ ನಾಮವು ಬಂದು ಎನ್ನ ನಾಲಿಗೆಯಲಿ ನಿಂದು ಸಲಹಲಿ ಶ್ರೀಪುರಂದರವಿಟ್ಠಲ

**ಆ ಪ ತ್ತು ಪ ರಿ ಹಾ ರ ಉ ಗಾ ಭೋ ಗ : ರಾ ಗ – ಅ ಠಾ ಣ**

ಒಂದು ಕೈಯಲ್ಲಿ ಖಡ್ಗ ಒಂದು ಕೈಯಲ್ಲಿ ಹಲಗೆ
ಅಂದವಾಗಿ ಪಿಡಿದು ದಿವಾರಾತ್ರಿಯಲಿ
ಬಂದು ಬದಿಯಲಿ ನಿತ್ಯ ಬಾರಾಸನಾಗಿ
ಹಿಂದುಮುಂದುಪದ್ರವಾಗದಂತೆ
ಇಂದಿರೆರಮಣ ಕಾಯುತ್ತಲಿರೆ ಎನಗಾವ
ಬಂಧನಗಳಿಲ್ಲ ಧನ್ಯ ಧನ್ಯ
ಕಂದರ್ಪನಯ್ಯ ಸಿರಿವಿಜಯವಿಟ್ಠಲರೇಯ
ಎಂದೆಂದಿಗಾಪತ್ತು ಬರಲೀಸನೊ

**ಉ ಗಾ ಭೋ ಗ : ರಾ ಗ – ಪ ಂ ತು ವ ರಾ ಳಿ**

ಕೋಟಿ ಕೋಟಿ ಜನ್ಮಕೆ ನಿನ್ನ ನಾಮವು ಒಂದೇ ಸಾಕು ದಾಟಿಸುವುದು ಭವಸಾಗರವ ।
ಬೂಟಕತನದಲಿ ಹರಿದಾಸನಾದರೆ ತೋಟವಿಲ್ಲದೆ ಮೋಟೆಯೆತ್ತಿದಂತೆ
ನೀಟಾಗದು ಕಾಣೋ ಎಂದಿಗೂ ಯಮ ಭಟರ ಕಾಟ ತಪ್ಪದೊ ಕಾಶಿಯಲ್ಲಿದ್ದರೂ
ಹಾಟಕಾಂಬರಧರ ವಿಜಯವಿಟ್ಠಲರೇಯ ನಾಟಿಸೊ ನಿನ್ನ ಚರಣಾಬ್ಜದಲಿ ಮನಸು

**ಉ ಗಾ ಭೋ ಗ : ರಾ ಗ – ವಿ ಜ ಯ ನಾ ಗ ರಿ**

ಅನ್ಯರಿಂದಲಿ ಸುಖವಾಯಿತೆಂಬುದಕಿಂತ
ನಿನ್ನಿಂದಾಯಿತೆಂಬ ಕ್ಲೇಶ ಮೇಲಯ್ಯ
ನಿನ್ನನರಿಯದೆ ಅನ್ಯರ ಬಲ್ಲೆನೆಂಬುದಕಿಂತ
ಕಣ್ಣಿಲ್ಲದಿರುವ ಕುರುಡ ಮೇಲಯ್ಯ
ಪುಣ್ಯ ಪಾಪವನರಿಯದೆ ಬದುಕುವ
ಮನುಜರಿಗಿಂತ ನಾಯಿಕುನ್ನಿ ಲೇಸಯ್ಯ ಕುಲ
ಹೀನನಾದರು ಸುಖದುಃಖಗಳು
ನಿನ್ನಿಂದಾಯಿತೆಂಬ ಮತಿ
ಚೆನ್ನಾಗಿ ತಿಳಿಸಯ್ಯ ಗೋಪಾಲವಿಟ್ಠಲ

**ಉ ಗಾ ಭೋ ಗ : ರಾ ಗ – ಮಾ ಯಾ ಮಾ ಳ ವ ಗೌ ಳ**

**ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ**
**ಇರುಳು ನಿನ್ನ ನೆನೆಯಲಿಲ್ಲ ನಿದ್ರೆ ಭರದಿಂದ**
**ಇವೆರಡರ ಬಾಧೆಗೆ ನಾ ಒಳಗಾದೆನೊ ಪುರಂದರವಿಟ್ಠಲ**
**ಕರುಣಿಸಿ ಕಾಯೊ ಪುರಂದರವಿಟ್ಠಲ**